KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಡಿಸೆಂಬರ್ ೧೬, ೨೦೧೦ (ಮಾರ್ಗಶಿರ ೨೫, ಶಕ ವರ್ಷ ೧೯೩೨) | ಸಂಚಿಕೆ ೪೯ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಅಸಂಕಇ 35 ಭಾಮಮ 2010, ಬೆಂಗಳೂರು, ದಿನಾಂಕ:25ನೇ ನವೆಂಬರ್, 2010**

ಶ್ರೀ ಖುಸ್ರೋ ಖುರೇಶಿ, ನಂ.571, 8ನೇ ಬ್ಲಾಕ್, 1ನೇ ಮುಖ್ಯರಸ್ತೆ, ಕೋರಮಂಗಲ, ಬೆಂಗಳೂರು–560 095, ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಕಇ 34 ಭಾಮಮ 2007, ದಿನಾಂಕ:25.02.2009ರಂದು ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರರನ್ನಾಗಿ ನಾಮ ನಿರ್ದೇಶನ ಮಾಡಿ ಆದೇಶ ಹೊರಡಿಸಲಾಗಿತ್ತು.

ಮುಂದುವರೆದು, ಶ್ರೀ ಖುಸ್ರೋ ಖುರೇಶಿ, ಇವರ ನಾಮ ನಿರ್ದೇಶನವನ್ನು ರದ್ದುಗೊಳಿಸಿ, ಇವರ ಸ್ಥಾನದಲ್ಲಿ ಶ್ರೀ ಅನ್ವರ್ ಮಾನಿಪ್ಪಾಡಿ, ಬಿನ್ ದಿವಂಗತ ಎಂ.ಎಸ್. ಮಾನಿಪ್ಪಾಡಿ, ಹೈ ಪಾಯಿಂಟ್ ಅಪಾರ್ಟ್‌ಮೆಂಟ್, ನಂತೂರು, ಮಂಗಳೂರು ಇವರನ್ನು 1994ರ ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧಿನಿಯಮ (1994ರ ಕರ್ನಾಟಕ ಅಧಿನಿಯಮದ) ಪ್ರಕರಣ–03ರ ಉಪ ಪ್ರಕರಣ–02ರ ಖಂಡ(ಎ) ಹಾಗೂ ಪ್ರಕರಣ 4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರನ್ನಾಗಿ ನಾಮ ನಿರ್ದೇಶನವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.957

**ಅಬ್ಬಾಸ್ ಷರೀಫ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

**HOME SECRETARIAT**

**NOTIFICATION**

**No.HD 116 SST 2010, Bangalore, Dated:16th November, 2010**

In exercise of the powers conferred by sub-clause (d) of clause (8) of section 2 of the Official Secrets Act, 1923 (Central Act XIX of 1923) read with Notification No.21/20/62 poll (1), Dated: 4th May, 1963 of the Government of India, Ministry of Home

Affairs, New Delhi, the Government of Karnataka hereby declare that the place specified in the column (2) of the Schedule below, shall be prohibited place for the purpose of the said Act.

**SCHEDULE**

| Sl. No. | Name of the place | Total Area | Survey No. | Boundaries |
|---|---|---|---|---|
| 1 | 2 | 3 | 4 | 5 |
| 1. | Mangalore Refinery and Petrochemicals Limited, Kuthethoor P.O.Via Katipalla, Mangalore-575030. | 2.08 Acres | 208/1A | East: Sy.No.208/2<br>West: Sy.No.08/1B<br>North: Sy.No.105<br>South: Sy.No.210/1 |
| | | 2.00 Acres | 210-A1 | East: Sy.No.210-A1<br>South: Netravathi river<br>West: Patta land of Ponkra S/o Nakura<br>North: Sy.No.208 |

By Order and in the name of the Governor of Karnataka,

**K.C. SIDDAPPA**

Under Secretary to Government,

Home Department (Law and Order, COFEPOSA and Prosecution)

PR-958

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 16 ಎಸ್ಎಂಆರ್ 2010, ಬೆಂಗಳೂರು, ದಿನಾಂಕ:23ನೇ ನವೆಂಬರ್, 2010**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 3ರ ಖಂಡ (ಎಫ್ಎಫ್)ನ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–Iರ ಐಟಂ 252ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ:

(253) ಜೀವನಿ ಹೆಲ್ತ್ ಅಂಡ್ ಮೆಡಿಕೇರ್ ಪ್ರೈ.ಲಿ., II ಸಂ.11/2, ಮಾಗಡಿ ಮುಖ್ಯರಸ್ತೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು–560079.

ಸದರಿ ನಿಯಮಗಳ ಷೆಡ್ಯೂಲ್ I ರ ಕ್ರಮಸಂಖ್ಯೆ:217ರಲ್ಲಿರುವ "ಸರ್ವೋದಯ ಹಾಸ್ಪಿಟಲ್, ಸಂ.11/2, ಮಾಗಡಿ ಮುಖ್ಯರಸ್ತೆ, ಅಗ್ರಹಾರ ದಾಸರಹಳ್ಳಿ, ಬೆಂಗಳೂರು–79" ನಮೂದನ್ನು ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 16 SMR 2010, Bangalore, Dated:23rd November, 2010**

In exercise of the powers conferred by clause (ff) of rule 3 of the Karnataka Government Servants' (Medical Attendance) Rules, 1963, the Government of Karnataka hereby adds the following item after item 252 of Schedule 1 to the said rules, namely:

(253) Jeevani Health and Medicare Pvt.Ltd., No.11/2, Magadi Main Road, Agrahara Dasarahalli, Bangalore-560079.

The entries at Sl.No.217 "Sarvodaya Hospital, No.11/2 Magadi Main Road, Agrahara Dasarahalli, Bangalore-79" in the Schedule I of the said Rules shall stand deleted.

By Order and in the name of the Governor of Karnataka,

**P. MARKANDEYA**

Under Secretary to Government,

Department of Personnel and Administrative Reforms (Service Rules-2)

PR-959

**COMMERCE AND INDUSTRIES SECRETARIAT**

**NOTIFICATION**

**No.CI.34:MMM.2009(P), Bangalore, Dated:12th October, 2010**

In pursuance of Section 5 read with Section 8 of the Mines and Minerals (Development and Regulation) Act, 1957 and after obtaining prior approval of Government of India, Ministry of Mines, New Delhi vide their letter No.5/128/2009-M.IV Dated:23.07.2010, the Government of Karnataka hereby accords sanction for grant of Mining Lease for a period of 20 years (Twenty years only) in favour of Shri R. Praveen Chandra (Legal heir of Late Shri E. Ramamurthy) for Iron ore and Manganese ore over an area of 132.30 hectares (One hundred and thirty two point three zero hectares only) of Ramajjanahalli Kaval and Mallapura villages of Hosadurga taluk, Chitradurga District as per the sketch furnished by the Director, Department of Mines and Geology, Bangalore subject to compliance of the provisions of the Mines and Minerals (Development and Regulation) Act, 1957 and Mineral Concession Rules, 1960 and other applicable Acts and Rules including Forest (Conservation) Act, 1980, Environmental Protection Act, 1986, EIA Notification 2006 etc., as amended from time to time and Rules made there under.

Sanction of this Mining lease is subject to the necessary clearances like Forest Clearance under Forest (Conservation) Act, 1980, Environmental Clearance under Environmental Protection Act, 1986, Consent for Establishment/ Consent for Operation from the KSPCB.

Sanction of this Mining lease is also subject to the terms and Conditions appended hereto and subject to outcome of writ petition/ appeal, if any, pending in respect of the area covered in this Notification.

The Mining lease should be executed only after submission of all the statutory documents/ clearances, by the applicant.

By Order and in the name of the Governor of Karnataka,

**A. CHANNEGOWDA**

Under Secretary to Government (Mines),

Commerce and Industries Department.

**TERMS AND CONDITIONS OF THE MINING LEASE SANCTIONED IN GOVERNMENT NOTIFICATION NO.CI.34:MMM.2009(P) Dated:12.10.2010**

a) Mining lease should be in respect of Iron ore and Manganese ore only. If other minerals are found in association with Iron ore and Manganese ore, they should be brought to the notice of Government and if the lessee desires to mine these minerals along with Iron ore and Manganese ore, he/she/it should do so only after the consent of Government is obtained in writing.

b) If bery1 or any other substance prescribed U/S 3 of the Atomic Energy Act, XXIX of 1948 is found to occur in the property under the lease, the lessee shall make available such mineral to the government of India.

c) The lease shall also be subject to the provisions of Rules in Chapter IV of the Minerals Concession Rules, 1960.

d) The lease shall also be subject to the Rules, issued U/S 18 of the Mines & Minerals (D & R) Act, 1957.

e) The lessee shall pay to the Director of Mines and Geology in Karnataka, Bangalore, necessary Security Deposit for due observance of the terms and conditions of the lease in accordance with Rule 32 of the lease issued to him.

f) The lessee shall be governed by all conditions that may be incorporated in the lease deed, to be executed.

g) The lessee shall abide by the rules contained in the Karnataka State Forest Manual, if the lease area covers any forestland.

h) Government shall have the right of purchasing the ore at current market rates.

i) The lease would be determined if the lessee fails to commence execution of the lease deed.

j) The area mentioned above is subject to verfication after actual survey and demarcation.

k) The lease shall be for a period of Twenty Years.

l) The lessee/s shall pay dead rent, cesses and royalty as detailed below:

**DEAD RENT PAYABLE PER HECTARE PER ANNUM**

| | |
|---|---|
| Ist year of the lease | : Rs.100/- |
| 2nd year to 5th year of the lease | : Rs.140/- |
| 6th year to 10th year of the lease | : Rs.280/- |
| 11th year of the lease & onwards | : Rs.400/- |

**Surface Rent:** Rs.2.50 per hectare per annum on the area used by the lessee/s for mining purposes.

**Local & other Cesses:** As prevalent in Chitradurga District.

**Royalty:** At the rate prescribed in Second Schedule to the Mines & Minerals (D&R) Act, 1957 and as amended from time to time.

m) The total area held by the applicant/s under mining lease including the present one, shall not exceed 10 Sq.Km.

n) Mining operations shall not be commenced/ conducted unless a qualified manager and other supervisory staff are appointed as required under the Matalliferous Mines Regulations, 1961 and relevant notices are sent to the Director-General of Mines Safety, Dhanbad with a copy of the same to the concerned Director of Mines Safety.

o) The minerals should be value added and the Lessee should adhere to existing National Mineral Policy and Karnataka Mineral Policy, 2008.

**A. CHANNEGOWDA**

PR-917

Under Secretary to Government (Mines),

Commerce and Industries Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 3 ಇಸಂಗ್ರ 2010, ಬೆಂಗಳೂರು, ದಿನಾಂಕ:21ನೇ ಅಕ್ಟೋಬರ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2)ರನ್ವಯ, ಅದನ್ನು ಕರ್ನಾಟಕ ಸಾರ್ವತ್ರಿಕ ಉಪಬಂಧಗಳ ಅಧಿನಿಯಮ, 1899 (Karnataka General Clauses Act, 1899) (1899ರ ಕರ್ನಾಟಕ ಅಧಿನಿಯಮ ಸಂಖ್ಯೆ: III) ದೊಂದಿಗೆ ಓದಿಕೊಂಡಂತೆ, ಇವುಗಳನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಮೈಸೂರು ನಗರ ಪಾಲಿಕೆಗೆ ಸಂಬಂಧಿಸಿದ ದಿನಾಂಕ:24.02.2009ರ ಅಧಿಸೂಚನೆ ಸಂಖ್ಯೆ: ಸಿಆಸುಇ 21 ಇಜಿವಿ 2009ನ್ನು ಈ ಮೂಲಕ ರದ್ದುಪಡಿಸುತ್ತಾ ಹಾಗೂ ಮೈಸೂರು ನಗರ ಪಾಲಿಕೆಗೆ ಸಂಬಂಧಿಸಿದಂತೆ ದಿನಾಂಕ:13.07.2009ರ ಅಧಿಸೂಚನೆ ಸಂಖ್ಯೆ: ಸಿಆಸುಇ 20 ಇಜಿವಿ 2009(4)ನ್ನು ಭಾಗಶಃ ಮಾರ್ಪಡಿಸುತ್ತಾ, ಮೈಸೂರು ನಗರ ಪಾಲಿಕೆಯ ರೂ.1.00 (ಒಂದು) ಲಕ್ಷಕ್ಕೂ ಮೀರಿದ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಈ ತಕ್ಷಣದಿಂದ ಜಾರಿಗೆ ಬರುವಂತೆ ಸಂಗ್ರಹಿಸತಕ್ಕದ್ದೆಂದು, ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹಾ ಹಂದಿಗೋಳ**

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 3 EPR 2010, Bangalore, Dated:21st October, 2010**

In exercise of the powers conferred by sub-section (2) of section 18A of the Karnataka Transparency in Public Procurements Act, 1999 (Karnataka Act 29 of 2000), read with section 21 of the Karnataka General Clauses Act, 1899 (Karnataka Act III of 1899) and in supersession of the notification No.DPAR 21 EGV 2009 Dated:24.02.2009 relating to the Corporation of the City of Mysore and in partial modification of the notification No.DPAR 20 EGV 2009(4) Dated:13.07.2009 in so far as it relates to the Corporation of the City of Mysore, the Government of Karnataka hereby specify that the Corporation of the City of Mysore shall procure all its procurements valued at Rs.One Lakh and above through e-Procurement Platform with immediate effect.

By Order and in the name of the Governor of Karnataka,

**LALITHA H. HANDIGOL**

PR-919

Desk Officer-I, (e-Governance)

Department of Personnel and Administrative Reforms.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಸಿಆಸುಇ 3 ಇಸಂಗ್ರ 2010, ಬೆಂಗಳೂರು, ದಿನಾಂಕ:28ನೇ ಅಕ್ಟೋಬರ್, 2010**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ:29)ರ ಕಲಂ 18–ಎರ ಉಪಕಲಂ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಉಡುಪಿ ನಗರ ಸಭೆ, ಉಡುಪಿ, ಇದರ ರೂ.5.00 (ಐದು) ಲಕ್ಷಕ್ಕೂ ಮೀರಿದ ಎಲ್ಲಾ ಸಂಗ್ರಹಣೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ, ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement platform) ಸಂಗ್ರಹಿಸತಕ್ಕದ್ದೆಂದು, ಕರ್ನಾಟಕ ಸರ್ಕಾರ, ಈ ಮೂಲಕ ಗೊತ್ತುಪಡಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹಾ ಹಂದಿಗೋಳ**

ಪೀಠಾಧಿಕಾರಿ–I, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**PERSONNEL AND ADMINISTRATIVE REFORMS SECRETARIAT**

**NOTIFICATION**

**No.DPAR 3 EPR 2010, Bangalore, Dated:28th October, 2010**

In exercise of the powers conferred by sub-section (2) of section 18A of the Karnataka Transparency in Public Procurements Act, 1999 (Karnataka Act 29 of 2000), the Government of Karnataka hereby specify that the Udupi City Municipal Council, Udupi shall, with immediate effect, procure all its procurements valued at Rs.5.00 (Five) lakhs and above through e-Procurement platform.

By Order and in the name of the Governor of Karnataka,

**LALITHA H. HANDIGOL**

PR-920

Desk Officer-I, (e-Governance)

Department of Personnel and Administrative Reforms.

**COMMERCE AND INDUSTRIES SECRETARIAT**

**NOTIFICATION**

**No.CI.293:MMM.2010, Bangalore, Dated:29th October, 2010**

In pursuance of sub-section (2) of Section 8 of the Mines and Minerals (Development and Regulation) Act, 1957, the Government of Karnataka was accorded sanction for First renewal of Mining Lease No.995 for a period of 20 years (Twenty years only) w.e.f. 29.09.1990 in favour of M/s. Mysore Minerals Limited, for Iron ore over an area of 33.60 Hectares (Thirty three point six zero hectares only) in Ubbalgundi village, Sandur taluk, Bellary District vide Government Notification No.CI.269:MMM. 2005 Dated:08.02.2006.

The said mining lease renewed over an area of 33.60 hectares is hereby revised and sanction is accorded to renew the mining lease over entire area of 80.94 hectares w.e.f. 29.09.1990 for a period of 20 years in favour of M/s. Mysore Minerals Limited.

The terms and conditions mentioned in the Government Notification No.CI.269:MMM.2005 Dated:08.02.2006 is remained same.

By Order and in the name of the Governor of Karnataka,

**A. CHANNEGOWDA**

PR-921

Under Secretary to Government (Mines)

Commerce & Industries Department.

ಆರ್ಥಿಕ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಆಇ 862 ವೆಚ್ಚ–12/10, ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2010**

ಕರ್ನಾಟಕ ಭವನಕ್ಕೆ ರೂ.1,34,532/– ವೆಚ್ಚದಲ್ಲಿ ಪೀಠೋಪಕರಣಗಳನ್ನು ಖರೀದಿಸಿರುವುದಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.923

**ಹೆಚ್. ಶೇಖರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 899 ವೆಚ್ಚ–12/10, ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2010**

ಜಿಲ್ಲಾ ಮಾನವ ಅಭಿವೃದ್ಧಿ ವರದಿಗಳಿಗೆ ಕೈಪಿಡಿಯನ್ನು ತಯಾರಿಸುವ ಕಾರ್ಯವನ್ನು Institute for Social And Economic Change (ISEC) ಸಂಸ್ಥೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಯೋಜನೆ, ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

I.S.E.C. ಸಂಸ್ಥೆಯಿಂದ ಉತ್ತಮ ಗುಣಮಟ್ಟದ ಸೇವೆಯನ್ನು reasonable (ಸಮಂಜಸ) ದರದಲ್ಲಿ ಸಂಗ್ರಹಿಸುವುದನ್ನು ಯೋಜನೆ, ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್.924

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 911 ವೆಚ್ಚ–12/10, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್, 2010**

ಪ್ರಾಜೆಕ್ಟ್‌ಗಳ ನಿರ್ವಹಣೆ ಮತ್ತು ಮೇಲ್ವಿಚಾರಣೆಯಲ್ಲಿ MS Project tools ನ್ನು ಉಪಯೋಗಿಸಿಕೊಳ್ಳುವ ಬಗ್ಗೆ 25 ಅಧಿಕಾರಿಗಳಿಗೆ ಮೆ: Microsoft ಸಂಸ್ಥೆಯ ಮೂಲಕ ಗುರುತಿಸಲ್ಪಟ್ಟ ಮೆ: SABCONS ಸಂಸ್ಥೆಯ ಮೂಲಕ ನೇರವಾಗಿ ರೂ.1.75 ಲಕ್ಷಗಳ ಅಂದಾಜು ವೆಚ್ಚದಲ್ಲಿ ತರಬೇತಿ ನೀಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಆರ್ಥಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಮೆ: SABCONS. ಸಂಸ್ಥೆಯಿಂದ ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಆರ್ಥಿಕ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್.925

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 80 ಇಆಇ 2010, ಬೆಂಗಳೂರು, ದಿನಾಂಕ:2ನೇ ನವೆಂಬರ್, 2010**

ಮಾಹಿತಿ ಹಕ್ಕು ಅಧಿನಿಯಮ, 2005 (ಕೇಂದ್ರದ 2005ರ ಅಧಿನಿಯಮ ಸಂಖ್ಯೆ:22)ರ ಕಲಂ 5 ಉಪಕಲಂ (2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ:31.10.2008ರ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 79 ಇಜಿಎಮ್ 2005ರನ್ವಯ ಶ್ರೀಮತಿ ಮೋಹನಾ ಬಾಯಿ, ಜ್ಯೂನಿಯರ್ ಕನ್ಸೋಲ್ ಆಪರೇಟರ್, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ನೇಮಕ ಮಾಡಿದ್ದು, ಅವರ ಆ ನೇಮಕಾತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

2. ಸದರಿ ಅಧಿನಿಯಮದಡಿ ಮಾಹಿತಿ ಕೇಳುವುದಕ್ಕೆ ಸಂಬಂಧಿಸಿದ, ಅವರ ವಶದಲ್ಲಿರುವ ಕಡತ ಮತ್ತು ಇತರೆ ದಾಖಲೆಗಳನ್ನು ಅವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ರಲ್ಲಿನ ಸಂಬಂಧಿಸಿದ ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳಿಗೆ ಕೂಡಲೇ ವರ್ಗಾಯಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹಾ ಹಂದಿಗೋಳ**

ಪಿ.ಆರ್.926

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 70 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ 70 ಸಿಎಸ್‌ಎಸ್ 2010 ದಿನಾಂಕ:29.03.2010ರಲ್ಲಿ ಮಳವಳ್ಳಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ, ಮಂಡ್ಯ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಹೆಚ್. ವೆಂಕಟೇಗೌಡ ಬಿನ್ ಹೊನ್ನೇಗೌಡ, ಉ: ಕುಂಟ್ ಕುಳ್ಳೇಗೌಡ, ಹುಸ್ಕೂರು ಗ್ರಾಮ, ಮಳವಳ್ಳಿ ತಾಲ್ಲೂಕು, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ರಾಮೇಗೌಡ ಬಿನ್ ಚನ್ನೇಗೌಡ, ಕಿರುಗಾವಲು, ಕಿರುಗಾವಲು ಹೋಬಳಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ ಇವರನ್ನು ಮಳವಳ್ಳಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ, ಮಂಡ್ಯ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.927

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 123 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್, 2010**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಕುಣಿಗಲ್ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಕುಣಿಗಲ್, ತುಮಕೂರು ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1) ಶ್ರೀ ಎಸ್.ಕೆ. ಚಿಕ್ಕರಾಮಯ್ಯ ಬಿನ್ ಕದಲಯ್ಯ, ಸಣಬಾ, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ.
2) ಶ್ರೀಮತಿ ಕಮಲಮ್ಮ ಕೋಂ ಎಸ್.ವಿ. ದಾಸೇಗೌಡ, ಶೆಟ್ಟಿಗೇಹಳ್ಳಿ ಕಸಬಾ ಹೋಬಳಿ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ.
3) ಶ್ರೀ ಎನ್.ಎಸ್. ಸುರೇಶ್ ಬಿನ್ ಲೇ: ನರಸಯ್ಯ, ಸಂತೆಪೇಟೆ, ಹುತ್ರಿದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.928

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 122 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್, 2010**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀಮತಿ ಶಶಿಕಲಾ ಕೋಂ ಶ್ರೀಧರ ಭಟ್, ಅವಲಗೋಡು ಅಂಚೆ, ಸೊರಬ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರನ್ನು ಸೊರಬ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಸೊರಬ, ಶಿವಮೊಗ್ಗ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.929

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 124 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್, 2010**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಹೆಚ್.ಎಂ. ರಾಘವೇಂದ್ರ ಬಿನ್ ಹೆಚ್.ಆರ್. ಮಂಜಪ್ಪ, ಅವುಕ ಕಮ್ಮಚ್ಚಿ ಅಂಚೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರನ್ನು

ಹೊಸನಗರ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಹೊಸನಗರ, ಶಿವಮೊಗ್ಗ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.930

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಅಪಜೀ 20 ಎಫ್‌ಪಿಸಿ 2010, ಬೆಂಗಳೂರು, ದಿನಾಂಕ:26ನೇ ಅಕ್ಟೋಬರ್, 2010**

ಕರ್ನಾಟಕ ಅರಣ್ಯ ಕಾಯ್ದೆ, 1963 ಹಾಗೂ ಅರಣ್ಯ ನಿಯಮ 1969ರ ನಿಯಮ 69, 144, 145 ಮತ್ತು 148 ರಡಿಯಲ್ಲಿ ಅರಣ್ಯ ಅಧಿಕಾರಿಗಳಿಗೆ ನೀಡಿರುವ ಅಧಿಕಾರವನ್ನು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದ ಅಧಿಕಾರಿಗಳು ಹಾಗೂ ಕ್ಷೇತ್ರ ಸಿಬ್ಬಂದಿ ವರ್ಗದವರಿಗೆ ನಿಗಮದ ಆಸ್ತಿ ಸ್ವತ್ತುಗಳನ್ನು ಸಂರಕ್ಷಿಸಲು ಅನುಕೂಲವಾಗುವಂತೆ ಸರ್ಕಾರದ ಆದೇಶ ಸಂಖ್ಯೆ: ಎಫ್‌ಎಫ್‌ಡಿ 51 ಎಫ್‌ಪಿಸಿ 1980 ದಿನಾಂಕ:27.02.1982 ರಲ್ಲಿ ನೀಡಲಾಗಿರುವ ಅಧಿಕಾರ ಪ್ರತ್ಯಾಯೋಜನೆಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಆದೇಶ ಹೊರಡಿಸಿದೆ:

| ಕ್ರಮ ಸಂಖ್ಯೆ | ಅರಣ್ಯ ಇಲಾಖೆಯ ಅಧಿಕಾರಿ: ಸಿಬ್ಬಂದಿಗಳ ಪದನಾಮ | ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ಸರಿಸಮಾನವಾದ ಹುದ್ದೆ |
|---|---|---|
| 1. | ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು | ವ್ಯವಸ್ಥಾಪಕ ನಿರ್ದೇಶಕರು |
| 2. | ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು/ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು | ಜಂಟಿ ವ್ಯವಸ್ಥಾಪಕ ನಿರ್ದೇಶಕರು/ ಕಾರ್ಯ ನಿರ್ವಾಹಕ ನಿರ್ದೇಶಕರು |
| 3. | ಅರಣ್ಯ ಸಂರಕ್ಷಣಾಧಿಕಾರಿಗಳು | ಸಾರ್ವತ್ರಿಕ ವ್ಯವಸ್ಥಾಪಕರು/ ಪ್ರಾದೇಶಿಕ ವ್ಯವಸ್ಥಾಪಕರು/ ಅರಣ್ಯ ಸಂರಕ್ಷಣಾಧಿಕಾರಿಗಳು |
| 4. | ಉಪ ಅರಣ್ಯ ಸಂರಕ್ಷಣಾಧಿಕಾರಿಗಳು | ವಿಭಾಗೀಯ ವ್ಯವಸ್ಥಾಪಕರು |
| 5. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು | ಸಹಾಯಕ ವಿಭಾಗೀಯ ವ್ಯವಸ್ಥಾಪಕರು |
| 6. | ವಲಯ ಅರಣ್ಯಾಧಿಕಾರಿಗಳು | ನೆಡುತೋಪು ಅಧೀಕ್ಷಕರು |
| 7. | ವನಪಾಲಕರು | ಸಹಾಯಕ ನೆಡುತೋಪು ಅಧೀಕ್ಷಕರು/ ಟಾಸ್ಕ್ ಸೂಪರ್‌ವೈಜರ್/ ಹಿರಿಯ ದರ್ಜೆ/ ನಿರ್ವಾಹಕರು |
| 8. | ಅರಣ್ಯ ರಕ್ಷಕರು | ಅರಣ್ಯ ರಕ್ಷಕರು/ ನೆಡುತೋಪು ರಕ್ಷಕರು |
| 9. | ಅರಣ್ಯ ವೀಕ್ಷಕರು | ಅರಣ್ಯ ವೀಕ್ಷಕರು/ ನೆಡುತೋಪು ವೀಕ್ಷಕರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಆರ್. ಕಲಾವತಿ**

ಪಿ.ಆರ್.931

ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ-1

**ಸಂಖ್ಯೆ: ಡಿಪಿಎಆರ್ 24 ಹೆಚ್‌ಹೆಚ್‌ಎಲ್ 2010, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್, 2010**

ಮೈಸೂರು ಮಹಾನಗರಪಾಲಿಕೆ ವಾರ್ಡ್ ನಂ.41ರ ಉಪಚುನಾವಣೆಯು ದಿನಾಂಕ:09.11.2010ರ ಮಂಗಳವಾರದಂದು ನಡೆಯುವ ಪ್ರಯುಕ್ತ ಮೈಸೂರು ಮಹಾನಗರಪಾಲಿಕೆ ವಾರ್ಡ್ ನಂ.41ರ ವ್ಯಾಪ್ತಿಯಲ್ಲಿ ಬರುವ ರಾಜ್ಯ ಸರ್ಕಾರಿ ಕಛೇರಿಗಳಿಗೆ, ಕೇಂದ್ರ ಸರ್ಕಾರದ ಕಛೇರಿಗಳಿಗೆ, ಕೇಂದ್ರ ಹಾಗೂ ರಾಜ್ಯ ಸರ್ಕಾರಿ ಕಾರ್ಖಾನೆ, ಕೈಗಾರಿಕಾ ಸಂಸ್ಥೆಗಳಿಗೆ, ಶಿಕ್ಷಣ ಸಂಸ್ಥೆಗಳಿಗೆ, ಶಾಲಾ ಕಾಲೇಜುಗಳಿಗೆ ಮಾತ್ರ (ಅನುದಾನಿತ ಶಿಕ್ಷಣ ಸಂಸ್ಥೆಗಳು ಸೇರಿದಂತೆ) ಸೀಮಿತಗೊಳಿಸಿ ದಿನಾಂಕ:09.11.2010ರಂದು ಸಾರ್ವತ್ರಿಕ ರಜೆಯನ್ನು ಘೋಷಿಸಿದೆ. ಈ ರಜೆಯು ತುರ್ತು ಸೇವೆಗಳಿಗೆ ಅನ್ವಯಿಸುವುದಿಲ್ಲ.

ಚುನಾವಣಾ ಕಾರ್ಯಕ್ಕೆ ನಿಯೋಜಿಸಲ್ಪಟ್ಟ ಎಲ್ಲಾ ಸರ್ಕಾರಿ ನೌಕರರು ಸದರಿ ದಿನಾಂಕದಂದು ಚುನಾವಣಾ ಕಾರ್ಯದಲ್ಲಿ ಹಾಜರಾಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ರಾಮ**

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ–2**

**ಸಂಖ್ಯೆ: ಡಿಪಿಎಆರ್ 24 ಹೆಚ್‌ಹೆಚ್‌ಎಲ್ 2010, ಬೆಂಗಳೂರು, ದಿನಾಂಕ:30ನೇ ಅಕ್ಟೋಬರ್, 2010**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ:20.25.26 (ಪಿಯುಬಿ–1), ದಿನಾಂಕ:15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯೇಬಲ್ ಇನ್‌ಸ್ಟ್ರುಮೆಂಟ್ ಆಕ್ಟ್–1881 (1881ರ ಅಧಿನಿಯಮ ಸಂಖ್ಯೆ:26)ರ 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ ದಿನಾಂಕ:09.11.2010ರ ಮಂಗಳವಾರದಂದು ಮೈಸೂರು ಮಹಾನಗರ ಪಾಲಿಕೆ ವಾರ್ಡ್ ನಂ.41ರ ಉಪಚುನಾವಣೆಯು ನಡೆಯುವ ಪ್ರಯುಕ್ತ ಮೈಸೂರು ಮಹಾನಗರಪಾಲಿಕೆ ವಾರ್ಡ್ ನಂ.41ರ ವ್ಯಾಪ್ತಿಯಲ್ಲಿ ಬರುವ ರಾಷ್ಟ್ರೀಕೃತ ಬ್ಯಾಂಕುಗಳು, ಇತರೆ ಬ್ಯಾಂಕುಗಳು, ಜೀವವಿಮಾ ನಿಗಮ ಮುಂತಾದ ಕಛೇರಿಗಳಿಗೆ ಮಾತ್ರ ಸೀಮಿತಗೊಳಿಸಿ, ಸಾರ್ವಜನಿಕ ರಜೆಯನ್ನು ಘೋಷಿಸಿದೆ. ಹಾಗೆಯೇ ಯಾವುದೇ ಬಿಸಿನೆಸ್ ಟ್ರೇಡ್, ಇಂಡಸ್ಟ್ರೀಯಲ್ ಅಂಡರ್‌ಟೇಕಿಂಗ್ ಅಥವಾ ಇನ್ನಿತರ ಎಸ್ಟಾಬ್ಲಿಷ್‌ಮೆಂಟ್‌ಗಳಲ್ಲಿ ಮತ್ತು ದಿನಗೂಲಿ (Casual Work) ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರು ಮತದಾನದ ದಿನಾಂಕದಂದು ವೇತನ ಸಹಿತ ರಜೆಗೆ ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ. ರಾಮು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

ಪಿ.ಆರ್.932

**FINANCE SECRETARIAT**

**NOTIFICATION**

**No.FD 297 Exp-12/2010, Dated:23rd October, 2010**

In exercise of the powers conferred by sub-section (1) of Section 25 of the Karnataka Transparency in Public Procurements Act, 1999 (Karnataka Act 29 of 2000) the Government of Karnataka hereby makes the following rules further to amend the Karnataka Transparency in Public Procurements Rules, 2000, namely:

**1. Title and Commencement:** (1) These rules may be called the Karnataka Transparency in Public Procurements (Amendment) Rules, 2010.

(2) They shall come into force from the date of their publication in the Official Gazette.

**2. Amendment of rule 25:** In the Karnataka Transparency in Public Procurements Rules, 2000, in rule 25, in sub-rule (2), for the proviso and Explanation, the following shall be substituted, namely:

"Provided that for a period of five years from the first day of April 2009, a small enterprise in the state shall be given fifteen percent price preference in accordance with the new industrial policy 2009-2014 issued by the Government Order No.CI 233 SPI 2008, Dated:28.02.2009 while determining the lowest evaluated price in procurements only in respect of Government Departments subject to the following conditions,-

(i) a enterprise should be registered with the Director of Industries and Commerce, Government of Karnataka as a small enterprise,

(ii) and produces a certificate obtained from the said authority certifying that it is a small enterprise.

**Explanation:** For the purpose of this proviso "Small enterprise" means an enterprise classified as such under sub-clause (ii) of clause (a) or sub-clause (ii) of clause (b) of sub-section (1) of section 7 of the Micro, Small and Medium Enterprises Development Act, 2006 (Central Act 27 of 2006)"

By Order and in the name of the Governor of Karnataka,

**H. SHEKHARAPPA**

Under Secretary to Government,

Finance Department (Procurement Cell).

PR-933

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಾರಿಇ 7 ಸಾಇನಿ 2010, ಬೆಂಗಳೂರು, ದಿನಾಂಕ:10ನೇ ನವೆಂಬರ್, 2010**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ 1957 (ಕರ್ನಾಟಕ ಅಧಿನಿಯಮ 35:1957)ರ ಸೆಕ್ಷನ್ 16(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಾರ್ವಜನಿಕ ಹಿತಾಸಕ್ತಿಯಿಂದ ಈ ಕೆಳಕಂಡ ಸಂಸ್ಥೆಯು ಹೊಂದಿರುವ ವಾಹನಕ್ಕೆ ಮೋಟಾರು ವಾಹನ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

| ಕ್ರ. ಸಂ. | ಸಂಸ್ಥೆಯ ಹೆಸರು | ವಾಹನ ಸಂಖ್ಯೆ | ಸಂಸ್ಥೆಯ/ ವಾಹನಗಳ ಉದ್ದೇಶ | ನೀಡಲಾದ ತೆರಿಗೆ ವಿನಾಯಿತಿ |
|---|---|---|---|---|
| 1. | ಗಾಂಧೀಭವನ, ಕರ್ನಾಟಕ ಗಾಂಧೀ ಸ್ಮಾರಕ ನಿಧಿ(ರಿ) ಬೆಂಗಳೂರು. | ಮಾರುತಿ ಇಕೋ ಹೊಸ ವಾಹನ ಕೆಎ–04–ಟಿಆರ್–1433 | ಈ ಸಂಸ್ಥೆಯು ಮಹಾತ್ಮ ಗಾಂಧೀಜಿಯವರ ತತ್ವ ಆದರ್ಶಗಳನ್ನು ಗ್ರಾಮಾಂತರ ಜಿಲ್ಲೆಗಳಲ್ಲಿರುವ ಸರ್ಕಾರಿ ಹಾಗೂ ಖಾಸಗಿ ಶಾಲಾ ಕಾಲೇಜುಗಳಲ್ಲಿ ಮಾಸಿಕ ಕಾರ್ಯಕ್ರಮಗಳು, ಪುಸ್ತಕ ಪ್ರದರ್ಶನ ಮತ್ತು ಉಪನ್ಯಾಸ ಕಾರ್ಯಕ್ರಮಗಳ ಮೂಲಕ ಪ್ರಚಾರ ಮಾಡುತ್ತಿದ್ದು, ಈ ಉದ್ದೇಶಕ್ಕೆ ವಾಹನವನ್ನು ಉಪಯೋಗಿಸುವ ಸಲುವಾಗಿ. | ಸರ್ಕಾರದ ಪತ್ರ ಸಂಖ್ಯೆ: ಟಿ.ಆರ್.ಡಿ. 29 ಸಾಇನಿ 2005 (ಪಿ) ದಿನಾಂಕ:01.06.2006ರ ಮಾರ್ಗಸೂಚಿ ಪ್ರಕಾರ ಅರ್ಹ ಗರಿಷ್ಠ ಮೊತ್ತವಾದ 25,000/– ರೂ.ಗಳನ್ನು ಜೀವಾವಧಿ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ. |

ಸದರಿ ಸಂಸ್ಥೆಯ ನೋಂದಾಯಿತ ವಾಹನದ ತೆರಿಗೆ ವಿನಾಯಿತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ವಾಹನದ ಮಾಲೀಕತ್ವ ಬದಲಾವಣೆಯಾದಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.

2) ಯಾವ ಉದ್ದೇಶಕ್ಕಾಗಿ ತೆರಿಗೆ ವಿನಾಯಿತಿ ನೀಡಲಾಗಿದೆಯೋ ಆ ಉದ್ದೇಶ ಬದಲಾದಲ್ಲಿ ತೆರಿಗೆ ವಿನಾಯಿತಿಯು ರದ್ಧುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.934

**ಬಾಲಕೃಷ್ಣರಾವ್**

ಪೀಠಾಧಿಕಾರಿ, ಸಾರಿಗೆ ಇಲಾಖೆ.

## ಆರ್ಥಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಆಇ 865 ವೆಚ್ಚ–12/10, ಬೆಂಗಳೂರು, ದಿನಾಂಕ:2ನೇ ನವೆಂಬರ್, 2010

ರಾಜ್ಯದ ಕಾರಾಗೃಹಗಳ ಆಡಳಿತವನ್ನು ಗಣಕೀಕರಣ ಮಾಡುವ ನಿಟ್ಟಿನಲ್ಲಿ 'ಪ್ರಿಸನ್ ಮ್ಯಾನೇಜ್‌ಮೆಂಟ್ ಸಿಸ್ಟಂ' (ಪ್ರಿಸಮ್ಸ್) ಎಂಬ ಸಾಫ್ಟ್‌ವೇರನ್ನು ಗೋವಾ ರಾಜ್ಯ ಸರ್ಕಾರದ ಅಧೀನ ಸಂಸ್ಥೆಯಾದ ಗೋವಾ ಎಲೆಕ್ಟ್ರಾನಿಕ್ಸ್ ಲಿಮಿಟೆಡ್ (ಜಿ.ಇ.ಎಲ್.) ಸಂಸ್ಥೆಯಿಂದ ನೇರವಾಗಿ ರೂ.15.00 ಲಕ್ಷಗಳ ವೆಚ್ಚದಲ್ಲಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಒಳಾಡಳಿತ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಗೋವಾ ಎಲೆಕ್ಟ್ರಾನಿಕ್ಸ್ ಲಿಮಿಟೆಡ್ ಸಂಸ್ಥೆಯಿಂದ ಉತ್ತಮ ಗುಣಮಟ್ಟದ ಸಾಫ್ಟ್‌ವೇರನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಒಳಾಡಳಿತ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್.935

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ಆರ್ಥಿಕ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಇ 926 ವೆಚ್ಚ–12/10, ಬೆಂಗಳೂರು, ದಿನಾಂಕ:8ನೇ ನವೆಂಬರ್, 2010

ವಿಶ್ವಬ್ಯಾಂಕ್‌ನಿಂದ ಅನುಮೋದಿತವಾದ 300 ಮಿಲಿಯನ್ ಯುಎಸ್ ಡಾಲರ್‌ಗಳ ನೆರವಿನಿಂದ 831 ಕಿ.ಮೀ. ಉದ್ದದ ರಸ್ತೆ ಅಭಿವೃದ್ಧಿಯ 'ಕರ್ನಾಟಕ ರಾಜ್ಯ ಹೆದ್ದಾರಿ ಸುಧಾರಣಾ ಯೋಜನೆ ಹಂತ–II' ಕ್ಕೆ ಪಿಸಿಸಿ ಸಮಾಲೋಚಕರು ತಯಾರಿಸಿರುವ ಇಪಿಎ ಮತ್ತು ಇಎಂಪಿಗಳ ಸ್ವತಂತ್ರ ಪರಿಸರ ಪರಿಶೀಲನೆಗಾಗಿ ಕರ್ನಾಟಕ ರಾಜ್ಯ ಹೆದ್ದಾರಿ ಸುಧಾರಣಾ ಯೋಜನೆಯವರು ರೂ.16.56 ಲಕ್ಷ ವೆಚ್ಚದಲ್ಲಿ ಮೆ:ಐಎಲ್ & ಎಫ್‌ಎಸ್‌ಎಕೋ ಸ್ಮಾರ್ಟ್, ಗುರ್‌ಗಾಂವ್, ಇವರನ್ನು ನೇರವಾಗಿ ನೇಮಿಸಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಲೋಕೋಪಯೋಗಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಮೆ: ಐಎಲ್ & ಎಫ್‌ಎಸ್ ಎಕೋ ಸ್ಮಾರ್ಟ್, ಗುರ್‌ಗಾಂವ್ ಸಂಸ್ಥೆಯಿಂದ ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಲೋಕೋಪಯೋಗಿ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಶೇಖರಪ್ಪ**

ಪಿ.ಆರ್.936

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ:71:ಎಲ್‌ಜಿಟಿ:2010, ಬೆಂಗಳೂರು, ದಿನಾಂಕ:29ನೇ ಅಕ್ಟೋಬರ್, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್ ಸೆಕ್ಷನ್ (1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ತುಮಕೂರು ಜಿಲ್ಲೆ, ಶಿರಾ ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ. ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಶಿರಾ | 1) ಶ್ರೀ ಟಿ.ಬಿ. ಜಯಚಂದ್ರ, ಶಾಸಕರು, ಶಿರಾ ತಾಲ್ಲೂಕು | ಅಧ್ಯಕ್ಷರು |
| | | 2) ಶ್ರೀ ವೈ.ಎನ್. ಮಂಜುನಾಥ್ ಬಿನ್ ನಾಗಣ್ಣ, ಯಲಿಯೂರು, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | ಸದಸ್ಯರು (ಸಾಮಾನ್ಯ) |
| | | 3) ಶ್ರೀ ಸಣ್ಣಪ್ಪ ಬಿನ್ ಮುದ್ದಪ್ಪ, ರತ್ನಸಂದ್ರ ಅಂಚೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | ಸದಸ್ಯರು(ಪ.ಪಂಗಡ) |
| | | 4) ಶ್ರೀಮತಿ ರಾಮಕ್ಕ ಕೋಂ ನಾಗರಾಜು ಬಿ. ಚಿಕ್ಕ ಹುಲಿಕುಂಟೆ ಅಂಚೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ಶಿರಾ ತಾಲ್ಲೂಕು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಪಿ.ಆರ್.937

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 70 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:4ನೇ ನವೆಂಬರ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 70 ಸಿಎನ್‌ಎಸ್ 2010, ದಿನಾಂಕ:26.10.2010ರಲ್ಲಿ ಮಳವಳ್ಳಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ, ಮಂಡ್ಯ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ರಾಮೇಗೌಡ ಬಿನ್ ಚನ್ನೇಗೌಡ, ಕಿರುಗಾವಲು, ಕಿರುಗಾವಲು ಹೋಬಳಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11)ರ ಪ್ರಕರಣ 29ರ ಉಪಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಶಿವಲಿಂಗೇಗೌಡ ಬಿನ್ ಲೇ: ಹೊಂಬಾಳೇಗೌಡ, ಕೋಟೆ, ಮಳವಳ್ಳಿ ಮಂಡ್ಯ ಜಿಲ್ಲೆ ಇವರನ್ನು ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಳವಳ್ಳಿ, ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.939

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 109 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:24ನೇ ಸೆಪ್ಟೆಂಬರ್, 2010**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ:11)ರ ಪ್ರಕರಣ 29ರ ಉಪಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ದಾವಣಗೆರೆ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ ನಿ., (ಜನತಾ ಬಜಾರ್), ಸರ್ ಮಿರ್ಜಾ ಇಸ್ಮಾಯಿಲ್ ರಸ್ತೆ, ಪಿ.ಜೆ. ಬಡಾವಣೆ, ದಾವಣಗೆರೆ–577002 ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1) ಶ್ರೀ ಬಾಲರಾಜ್ ಎರಸೀಮೆ, ಅಹಮದ್‌ನಗರ, ದಾವಣಗೆರೆ
2) ಶ್ರೀ ಕೆ. ಪ್ರಭು ಕಲ್ಬುರ್ಗಿ ಬಿನ್ ಗಂಗಪ್ಪ ಹಳೇ ಬೇತೂರು ರಸ್ತೆ, ದಾವಣಗೆರೆ.
3) ಶ್ರೀಮತಿ ಟಿ. ಕಲಾವತಿ ಕೋಂ ಎನ್.ಟಿ. ಅರಸ್, ಪೀರ್ ಬಡಾವಣೆ, ನಿಟ್ಟುವಳ್ಳಿ, ದಾವಣಗೆರೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್.ಎಸ್. ನೂಲಿ**

ಪಿ.ಆರ್.940

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**FINANCE SECRETARIAT**

**NOTIFICATION**

**No.FD 25 TAR 2009, Bangalore, Dated:18th November, 2010**

Where as in exercise of the powers conferred by sub-section (1) of section 5 of the Karnataka Protection of Interest of Depositors in Financial Establishments Act, 2004.

(i) the House Rent Controller, South Range and Special Land Acquisition officer, Bangalore have been appointed as Competent Authorities in respect of Bangalore North sub Division, Bangalore and Bangalore South sub-division, Bangalore respectively vide Notification No.FD 42 TAR 2006 dated:04.08.2006; and

(ii) the Assistant Commissioner and Sub-Divisional Magistrates have been appointed as Competent Authorities in respect of all other sub Divisions in respect of areas coming under their jurisdiction, vide Notification No.FD 2 TAR 2007 dated:12.12.2007.

In the case of M/s. Vinivinc and other allied companies, the properties seized and auctioned are in the jurisdiction of two or three Competent Authorities and the depositors are scattered throughout the State of Karnataka and possibly in the neighbouring States. In order to prevent duplication of efforts, necessity has arisen to authorize one Competent Authority to call for claims from all the depositors of M/s. Vinivinc and other allied companies against the company through a public notice and undertake the verification task on behalf of other Competent Authorities.

Hence in exercise of powers conferred under section 22 of the Karnataka Protection of Interest of Depositors in Financial Establishments Act, 2004, the Assistant Commissioner, Doddaballapur sub-division, is authorised to call for claims fo the Depositors of M/s. VINIV-INC and other allied companies through public notice and undertake the entire verification task on behalf of other Competent Authorities. This will not withdraw any other powers of other Competent Authorities bestowed under this Act.

By Order and in the name of the Governor of Karnataka,

**C. SHAMA RAO**

PR-949

Deputy Secretary to Government (FR & BCC),

Finance Department.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ:75:ಎಲ್‌ಜಿಸಿ:2010, ಬೆಂಗಳೂರು, ದಿನಾಂಕ:11ನೇ ನವೆಂಬರ್, 2010**

ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಸಬ್‌ಸೆಕ್ಷನ್(1) ಸೆಕ್ಷನ್ 94–ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕಿನ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಯನ್ನು ಕೆಳಕಂಡ ಅಧಿಕಾರಿ ಹಾಗೂ ಅಧಿಕಾರೇತರ ಸದಸ್ಯರನ್ನೊಳಗೊಂಡಂತೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ ರಚಿಸಿ ಆದೇಶಿಸಿದೆ.

| ಕ್ರ. ಸಂ. | ತಾಲ್ಲೂಕು | ಸದಸ್ಯರು | |
|---|---|---|---|
| 1. | ಮೊಳಕಾಲ್ಮೂರು | 1) ಶ್ರೀ ಎನ್.ವೈ. ಗೋಪಾಲಕೃಷ್ಣ, ಶಾಸಕರು ಮೊಳಕಾಲ್ಮೂರು ತಾಲ್ಲೂಕು | ಅಧ್ಯಕ್ಷರು |
| | | 2) ಶ್ರೀ ಸಣ್ಣ ರುದ್ರಪ್ಪ ಮುತ್ತಿಗಾರಹಳ್ಳಿ, ಚಿತ್ರದುರ್ಗ ಜಿಲ್ಲೆ. | ಸದಸ್ಯರು (ಸಾಮಾನ್ಯ) |
| | | 3) ಶ್ರೀ ನಾಗರಾಜು ಬಿನ್ ಬೋರನಾಯಕ ಸೂರಮ್ಮನಹಳ್ಳಿ, ಚಿತ್ರದುರ್ಗ ಜಿಲ್ಲೆ. | ಸದಸ್ಯರು(ಪ.ಪಂಗಡ) |
| | | 4) ಶ್ರೀಮತಿ ಲಲಿತಮ್ಮ ಕೋಂ ಶಿವರುದ್ರಪ್ಪ ರಾಂಪುರ, ಚಿತ್ರದುರ್ಗ ಜಿಲ್ಲೆ. | ಸದಸ್ಯರು (ಮಹಿಳೆ) |
| | | 5) ತಹಶೀಲ್ದಾರ್, ಮೊಳಕಾಲ್ಮೂರು ತಾಲ್ಲೂಕು | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜಿ. ಲಕ್ಷ್ಮೀನಾರಾಯಣ**

ಪಿ.ಆರ್.950

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಾಇ 129 ಎಲ್‌ಡಬ್ಲ್ಯೂಎ 2010, ಬೆಂಗಳೂರು, ದಿನಾಂಕ:18ನೇ ನವೆಂಬರ್, 2010

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ "ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ" ಯನ್ನು ಅಧಿಸೂಚನೆ ಸಂಖ್ಯೆ: ಕಾಇ 30 ಎಲ್‌ಡಬ್ಲ್ಯೂಎ 2010, ದಿನಾಂಕ:23.04.2010ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ಮುಂದಿನ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, "ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ"ಯನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಮುಂದಿನ 6 ತಿಂಗಳ ಅವಧಿಯವರೆಗೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

ಪಿ.ಆರ್.951

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 65 ಮುಸೇವಿ 2010, ಬೆಂಗಳೂರು, ದಿನಾಂಕ:4ನೇ ನವೆಂಬರ್, 2010

ರಾಜ್ಯದ ಜಿಲ್ಲಾಧಿಕಾರಿಗಳ ಕಛೇರಿಗಳಲ್ಲಿ ಜಿಲ್ಲೆಯ ಧಾರ್ಮಿಕ ದತ್ತಿ ಅಧಿಸೂಚಿತ ಸಂಸ್ಥೆಗಳ ವ್ಯವಹಾರಗಳಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳಿಗೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಧಾರ್ಮಿಕ ದತ್ತಿ ಇಲಾಖೆಯ ಮುಜರಾಯಿ ಸಹಾಯಕರು/ ದತ್ತಿ ಸಹಾಯಕರು ಸಮೂಹ–'ಬಿ' ವೃಂದಕ್ಕೆ ಸೇರಿದ್ದು, ಹಿಂದಿನ ಎಲ್ಲಾ ಕಾಯ್ದೆಗಳು ರದ್ದಾಗಿದ್ದರಿಂದ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 5 ರನ್ವಯ ಈ ಮುಜರಾಯಿ ಸಹಾಯಕರು/ ದತ್ತಿ ಸಹಾಯಕರು ಎಂಬ ಹುದ್ದೆಗಳ ಪದನಾಮವನ್ನು "ಧಾರ್ಮಿಕ ದತ್ತಿ ತಹಶೀಲ್ದಾರ್" ಎಂದು ಈ ಕೂಡಲೇ ಜಾರಿಗೆ ಬರುವಂತೆ ಮರು ಪದನಾಮೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್.953

## FOREST, ENVIRONMENT AND ECOLOGY SECRETARIAT

## NOTIFICATION

### No.FEE 36 EPC 2010, Bangalore, Dated:15th November, 2010

In partial modification of Government Notification No.FEE 97 EPC 2006, Dated:30.04.2008 & in supercession of earlier orders issued in this regard, Government hereby accords sanction to modify the term of office of Mr. Justice A.M. Farooq, Retired Judge of High Court of Karnataka, as Chairman, Karnataka State Appellate Authority, Bangalore for a period of 3 years with effect from 30.04.2008, in exercise of powers conferred under Section 28 of the Water (Prevention & Control of Pollution) Act, 1974 & under Sec. 31 of the Air Prevention & Control of Pollution) Act, 1981.

The terms & conditions shall remain the same as per Government Order No.FEE 97 EPC 2006, Dated:23.07.2008.

By Order and in the name of the Governor of Karnataka,

**B. MANOHAR**

Under Secretary to Government,

Forest, Environment and Ecology Department.

PR-954

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಆಸುಇ 7 ಹೆಚ್‌ಹೆಚ್ ಎಲ್ 2009(ಭಾಗ), ಬೆಂಗಳೂರು, ದಿನಾಂಕ:19ನೇ ನವೆಂಬರ್, 2010

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ: 20, 25, 26, ಪಿಯುಬಿ–1 ದಿನಾಂಕ:15.06.1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಿರುವಂತೆ, ನೆಗೋಷಿಯೇಬಲ್ ಇನ್ಸ್‌ಸ್ಟ್ರುಮೆಂಟ್ ಆಕ್ಟ್–1881 (1881 ಕೇಂದ್ರ ಮಸೂದೆ–24) 25ನೇ ಸೆಕ್ಷನ್ ನಲ್ಲಿರುವ

